# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

UNJAVU' Kannada Weekly, KOPPA-CHM. ಫೋನ್ : 114

ವರ್ಷ 4ನೇ ಸಂಚಿಕೆ ಕೊಪ್ಪ 5-8-1990 ಭಾನುವಾರ ಬೆಲೆ 60 ಪೈಸೆ


## ಗಿರಿಜನ 'ಆಶ್ರಮ ಶಾಲೆ' ಉದ್ಘಾಟನೆ

ಮೇಗೂರು : ಗಿರಿಜನ ಅಭಿವೃದ್ಧಿ ಕಾರ್ಯಕ್ರಮದಡಿ ಇಲ್ಲಿ ಸ್ಥಾಪಿಸಲಾಗಿರುವ ಆಶ್ರಮ ಶಾಲೆಯನ್ನು ಜಿ. ಪ. ಅಧ್ಯಕ್ಷ ಬಿ. ಎಲ್. ರಾಮದಾಸ್ ಈಚೆಗೆ ಉದ್ಘಾಟಿಸಿದರು ಜಿ. ಪ ಮುಖ್ಯ ಕಾರ್ಯದರ್ಶಿ, ತಾಲ್ಲೂಕಿನ ಜಿ ಪ. ಸದಸ್ಯರು, ಅಗಳಗಂಡಿ ಮಂಡಲ ಪ್ರಧಾನರು, ಕ್ಷೇತ್ರಾಭಿವೃದ್ಧಿ ಅಧಿಕಾರಿಗಳು ಅತಿಥಿಗಳಾಗಿದ್ದರು. ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ ಮೃತ್ಯುಂಜಯ ಸ್ವಾಗತಿಸಿ ಸೋಮಶೇಖರ ರಾಜ ಅರಸು ವಂದಿಸಿದರು.

1ರಿಂದ 4 ನೇ ತರಗತಿವರೆಗಿನ ಈ ಶಾಲೆಗೆ 50 ಮಂದಿ ಗಿರಿಜನ ಮಕ್ಕಳು ಭರ್ತಿಯಾಗಿದ್ದಾರೆ. ಇಂಥದೇ ಇನ್ನೊಂದು ಶಾಲೆ ನ ರಾ. ಪುರ ಪಟ್ಟಣಕ್ಕೆ ಮಂಜೂರಾಗಿದೆ ಗೌಡಲು, ಹಸಲರು, ಮೇದಾರ, ಮರಾಟಗರು ಮೊದಲಾದ ಗಿರಿಜನ ಪಂಗಡಗಳವರಿಗೆ ಉಪಯೋಗವಾಗಲಿರುವ ಈ ಶಾಲೆಗಳ ಸ್ವಂತ ಕಟ್ಟಡಗಳಿಗಾಗಿ 1.65 ಲಕ್ಷ ರೂ. ಬಿಡುಗಡೆಯಾಗಿದ್ದು, 4 ತಿಂಗಳಲ್ಲಿ ಶಾಲೆಗಳು ಸ್ವಂತ ಕಟ್ಟಡಗಳಿಗೆ ಸ್ಥಳಾಂತರಗೊಳ್ಳಲಿವೆ ಎಂದು ವರದಿಯಾಗಿದೆ.

### ...ವೃತ್ತ ಅಧ್ಯಾಪಕರಿಗೆ ಕರೆ

ಕೊಪ್ಪ : ನಿವೃತ್ತ ಅಧ್ಯಾಪಕರನ್ನು ...0 ರೂ. ಮಾಸಿಕ ಗೌರವ ಧನದ ಮೇಲೆ ...ಲೆಗಳಿಗೆ ತಾತ್ಕಾಲಿಕ ನೇಮಕ ಮಾಡಿ...ಳ್ಳುವುದಕ್ಕೆ ಜಿಲ್ಲಾ ಪರಿಷತ್ತು ಅನು...ಮೋದನೆ ನೀಡಿದ್ದು, ಆಸಕ್ತರು ಕೊಪ್ಪ ...|| ಶಿಕ್ಷಣಾಧಿಕಾರಿಗಳನ್ನು ಸಂಪರ್ಕಿಸಲು ...ಸಲಾಗಿದೆ ಅಧ್ಯಾಪಕ ಹುದ್ದೆಗಳು ಖಾಲಿ ...ುವ ಅತ್ಯಂತ ಹಳ್ಳಿಗಾಡಿನ ಸ್ಥಳಗಳಲ್ಲಿನ ...ೀಯ ಅಭ್ಯರ್ಥಿಗಳಿಗೆ ಆದ್ಯತೆ ನೀಡ...ಗುವುದೆಂದು ಎ ಇ ಒ ಚಾಮರಾಜ್ ...ಸಿದ್ದಾರೆ.

### ...ಪ್ಪು ಹಲಗೆ'ಯಲ್ಲಿ ಕೊಪ್ಪ ತಾ||ಗೆ 61 ಶಿಕ್ಷಕರ ಹುದ್ದೆ

'ಕಪ್ಪು ಹಲಗೆ' ಯೋಜನೆಯಡಿ ...ಪ್ಪ ತಾ||ಗೆ 61 ಶಿಕ್ಷಕರ ಹುದ್ದೆಗಳು ...ಂಜೂರಾಗಿದ್ದು, ಜಿಲ್ಲಾ ನೇಮಕಾತಿ ಸಮಿ...ಯಿಂದ ನೇಮಕಗಳಾಗಲು ಇನ್ನೂ ನಾ...ಲ್ಕೈದು ತಿಂಗಳು ಹಿಡಿಯಬಹುದೆಂದೂ ...ಮರಾಜ್ ತಿಳಿಸಿದ್ದಾರೆ.

# ಕೊಪ್ಪ ಸುತ್ತ ಅಕ್ರಮ ಬೇಲಿ ತೆರವಿಗೆ ತಹಸೀಲ್ದಾರ್ ಕ್ರಮ

**ಕೊಪ್ಪ : ಈ ತಾಲ್ಲೂಕಿನ ಎಲ್ಲ ಕಡೆ, ಮುಖ್ಯವಾಗಿ ಕೊಪ್ಪ ಪಟ್ಟಣದ ಸುತ್ತಮುತ್ತ ಸರ್ಕಾರಿ ಜಾಗದಲ್ಲಿ ಅನಧಿಕೃತವಾಗಿ ಬೇಲಿ ಹಾಕಿಕೊಂಡಿರುವವರು 10 ದಿನದೊಳಗೆ ತಾವಾಗಿಯೇ ತಮ್ಮ ಬೇಲಿಗಳನ್ನು ತೆರವು ಮಾಡದಿದ್ದಲ್ಲಿ ಕಾನೂನು ರೀತ್ಯಾ ತೆರವು ಮಾಡಿಸುವುದಾಗಿ ತಹಸೀಲ್ದಾರರು ಎಚ್ಚರಿಸಿದ್ದಾರೆ.**

ಪೇಟೆಯಲ್ಲಿ ಅಥವಾ ಇತರ ಕಡೆಗಳಲ್ಲಿ ಮನೆ, ಅಂಗಡಿ, ಜಮೀನು ಮುಂತಾದುವನ್ನು ಹೊಂದಿರುವ ಅನುಕೂಲಸ್ಥರೂ ಸಹ ಹೀಗೆ ಪೇಟೆಯ ಸುತ್ತಮುತ್ತಲ ಬೆಲೆ ಬಾಳುವ ಭೂಮಿಗೆ ಬೇಲಿ ಹಾಕಿಕೊಂಡಿದ್ದು, ಇದರಿಂದಾಗಿ ಮಂಡಲ ಪಂಚಾಯ್ತಿಗಳು ಸರ್ಕಾರದಿಂದ ಭೂಮಿ ಪಡೆದು ಮನೆಯಿಲ್ಲದವರಿಗೆ ನಿವೇಶನಗಳನ್ನು ಹಂಚಲು ಅಡಚಣೆಯಾಗಿದೆ ಎಂದು ಹರಂದೂರು, ಬಿಂತ್ರವಳ್ಳಿ, ಕೊಪ್ಪ ಮುಂತಾದ ಮಂಡಲ ಪ್ರಧಾನರು ತಹಸೀಲ್ದಾರರಲ್ಲಿ ದೂರಿತ್ತಿರುವುದಾಗಿ ತಿಳಿದು ಬಂದಿದೆ.

ಇದೊಂದು ತೀವ್ರ ಸಮಸ್ಯೆಯಾಗಿದ್ದು, ಕೂಡಲೇ ಕಟ್ಟುನಿಟ್ಟಾಗಿ ಕ್ರಮ ಕೈಗೊಳ್ಳುವುದು ಅನಿವಾರ್ಯವಾಗಿದೆ ಎಂದು ತಹಸೀಲ್ದಾರ್ ಜಿ.ಎಸ್. ನಾಯಕ್ ತಿಳಿಸಿದ್ದಾರೆ

ಹರಂದೂರು ಮಂಡಲ ಪ್ರಧಾನ ಜಿ.ಡಿ. ಪರಮೇಶ್ವರ ನೀಡಿರುವ ಒಂದು ಪ್ರತ್ಯೇಕ ಹೇಳಿಕೆಯಲ್ಲಿ, ಈ ಹಿಂದೆ ಜನತಾ ನಿವೇಶನಗಳನ್ನು ಬೇಕಾಬಿಟ್ಟಿಯಾಗಿ ಹಂಚಿದ್ದು, ಅವುಗಳಲ್ಲಿ ಬಹಳಷ್ಟು ಪರಭಾರೆಯಾಗಿ, ಸಾಗುವಳಿ ಚೀಟಿ ಮತ್ತು ಮಂ. ಪಂ. ಅಸೆಸ್‌ಮೆಂಟ್‌ಗಳಲ್ಲಿ ಬೇರೆ ಬೇರೆ ಹೆಸರುಗಳು ದಾಖಲಾಗಿರುವ ಹಲವಾರು ಪ್ರಕರಣಗಳಿವೆ ಎಂದಿದ್ದಾರೆ.

ಕೆಲವು ವ್ಯಕ್ತಿಗಳಂತೂ ಇದನ್ನೇ ವೃತ್ತಿಯನ್ನಾಗಿ ಮಾಡಿಕೊಂಡು, ಮಂಡಲ ಪ್ರಧಾನರ, ಸದಸ್ಯರ ಅಥವಾ ಇನ್ನಿತರ ನೌಕರರ ಹೆಸರು ಹೇಳಿ, ಮುಗ್ಧ ಬಡ ಜನರಿಗೆ ಮೋಸ ಮಾಡುತ್ತಿರುವುದು ಸಹ ತಮ್ಮ ಗಮನಕ್ಕೆ ಬಂದಿದ್ದು, ಇಂಥ ಎಲ್ಲ ಅಕ್ರಮಗಳ ವಿರುದ್ಧವೂ ಕಟ್ಟುನಿಟ್ಟಾಗಿ ಕ್ರಮ ಕೈಗೊಂಡು ಭೂಮಿ ಅತಿಕ್ರಮಿಸಿರುವುದನ್ನೆಲ್ಲ ತೆರವು ಮಾಡಿಸುವಂತೆ ತಹಸೀಲ್ದಾರರಿಗೆ ಮನವಿ ಮಾಡಿರುವುದಾಗಿ ತಿಳಿಸಿದ್ದಾರೆ.

### ಜಾತ್ಯತೀತ ವಿವಾಹ

ಕೊಪ್ಪ : ಭಾರತ್ ರೈಸ್‌ಮಿಲ್ ಬಳಿಯ ನ್ಯೂ ಫಿಟ್‌ವೆಲ್ ಆಟೋ ವರ್ಕ್ಸ್ ಮಾಲೀಕ ಬಿ ಎಸ್ ರವಿ ಕುಮಾರ್ (ಚಿಕ್ಕಮಗಳೂರಿನ, ಸೆಲ್ವರಾಜ್‌ರ ಮಗ) ಹಾಗೂ ತಲಮಕ್ಕಿ ವಾಸಿ ಮಾಧವನ್ ಪಿಳ್ಳೆಯವರ ಮಗಳು ಪುಷ್ಪ ಇವರ ವಿವಾಹವು ಜು. 13ರಂದು ವಧುವಿನ ಮನೆಯಲ್ಲಿ ಸಡಗರದಿಂದ ನೆರವೇರಿತು. ವಧೂ-ವರರಿಬ್ಬರ ತಂದೆ-ತಾಯಿಗಳೂ ತಮ್ಮ ಬಂಧುಗಳೊಂದಿಗೆ ವಿವಾಹ ನೆರವೇರಿಸಿದರು

ಕೊಪ್ಪ: ಚಿಟ್ಟೆಮಕ್ಕಿ ಪವಿತ್ರ ವನದ ಉದ್ಘಾಟನೆ ಹರಂದೂರು ಮಂಡಲದ ಆಶ್ರಯದಲ್ಲಿ ಶಾಸಕರಿಂದ ಶೀಘ್ರದಲ್ಲಿ ನಡೆಯಲಿದೆ.

## ನ.ರಾ. ಪುರ ತಾ|| ಬರ ಪೀಡಿತವೆಂದು ಘೋಷಿಸಲು ಆಗ್ರಹಿಸಿ ಜಿ.ಪ. ನಿರ್ಣಯ

ಚಿಕ್ಕಮಗಳೂರು : ಸಾಕಷ್ಟು ಮಳೆ ...ಾಗದೆ ಕ್ಷಾಮದ ದಟ್ಟ ಛಾಯೆಯನ್ನೆ...ರಿಸುತ್ತಿರುವ ಜಿಲ್ಲೆಯ 4 ತಾ||ಗಳನ್ನು ...ರ ಪೀಡಿತ'ವೆಂದು ಘೋಷಿಸಿ ಪರಿಹಾರ ...ಡಬೇಕೆಂದು ಜು. 26 ರ ಜಿಲ್ಲಾ ಪರಿಷತ್ ಸಭೆ ಒಮ್ಮತದಿಂದ ಸರ್ಕಾರವನ್ನು ಒತ್ತಾಯಿಸಿದೆ. ಈ ಪೈಕಿ ನ. ರಾ. ಪುರ ತಾಲ್ಲೂಕೂ ಸೇರಿದ್ದು, ತರೀಕೆರೆ, ಕಡೂರು, ಚಿಕ್ಕಮಗಳೂರು ಇತರ 3 ತಾ||ಗಳಾಗಿವೆ.

ಶೃಂಗೇರಿ ಶಾಸಕ ಯು. ಕೆ. ಶಾಮಣ್ಣ ಮಾತನಾಡಿ, "ನಿಮಗೆ ಅನಾವೃಷ್ಟಿಯಾದರೆ ನಮಗೆ ಅತಿವೃಷ್ಟಿಯಿಂದ ಹಾನಿಯಾಗಿದೆ ಗದ್ದೆಗಳು ಕೊಚ್ಚಿ ಹೋಗಿ, ಅಡಿಕೆಗೆ ಕೊಳೆ ರೋಗ ವ್ಯಾಪಿಸಿದೆ. ಈ ಬಗ್ಗೆ ಸರ್ಕಾರದ ಬಳಿಗೆ ಜಿ ಪ ನಿಯೋಗ ಹೋಗುವುದು ಒಳ್ಳೆಯದು" ಎಂದರು. ಇದಕ್ಕೆ ಕೆ. ವಿ. ರಾಮಪ್ಪಯ್ಯ ಬೆಂಬಲ ಸೂಚಿಸಿದರು.

### ...ರಾ.ಪುರದ ಹಿರಿಯ ವಕೀಲ ಎಸ್. ಶೇಷಾದ್ರಿ ನಿಧನ

ನ.ರಾ. ಪುರ : ಇಲ್ಲಿನ ಅತ್ಯಂತ ಹಿರಿಯ ...ಕೀಲರಾಗಿದ್ದ ಎಸ್. ಶೇಷಾದ್ರಿ ಜು. 24ರ ...ಳಗಿನ ಜಾವ ನಿಧನರಾದರು. ಅವರಿಗೆ ...2 ವರ್ಷ ವಯಸ್ಸಾಗಿತ್ತು ನ್ಯಾಯಾ...ಧೀಶರು, ವಕೀಲರು ಮತ್ತು ಕೋರ್ಟ್ ...ಸಿಬ್ಬಂದಿ ಸಂತಾಪ ಸೂಚಕ ಸಭೆ ನಡೆಸಿ, ...ನಂತರ ಮೃತರ ಅಂತಿಮ ದರ್ಶನ ಪಡೆ...ದು. ಕೋರ್ಟ್ ಕಲಾಪಗಳನ್ನು ಮುಂ...ದೂಡಲಾಗಿತ್ತು.

### ಕೊಪ್ಪ, ಶೃಂಗೇರಿ ಮಳೆ

ಕೊಪ್ಪ : ಈ ತಾಲ್ಲೂಕಿನಲ್ಲಿ ಈವರೆಗೆ ...ಸರಿ 75 ರಿಂದ 80 ಅಂಗುಲ ಮಳೆ...ಯಾಗಿದೆ. ಕಳೆದ ವರ್ಷ ಇದೇ ಅವಧಿಯಲ್ಲಿ ...ರಿಂದ 70 ಅಂಗುಲ ಮಳೆಯಾಗಿತ್ತು. ಶೃಂಗೇರಿ ತಾ||ನಲ್ಲಿ ಸರಾಸರಿ 85 ರಿಂದ ... ಅಂಗುಲ ಮಳೆಯಾಗಿರುವುದಾಗಿ ...ದು ಬಂದಿದೆ.

## ಜೈವಿಕ ಕೀಟ ನಿಯಂತ್ರಣದ ಬಗ್ಗೆ ಪ್ರಾತ್ಯಕ್ಷಿಕೆ

ಕೊಪ್ಪ : ಇಲ್ಲಿನ ಸಿಂಡಿಕೇಟ್ ಬ್ಯಾಂಕ್, ಜೇಸೀಸ್ ಹಾಗೂ ಕೃಷಿ ವಿಚಾರ ವಿನಿಮಯ ಕೇಂದ್ರಗಳ ಆಶ್ರಯದಲ್ಲಿ ,ಸ್ವಾತಂತ್ರ್ಯೋತ್ಸವದ ಅಂಗವಾಗಿ ಆಗಸ್ಟ್ 15 ರಂದು ಮಧ್ಯಾಹ್ನ 3-30 ಗಂಟೆಗೆ ಪುರಭವನದಲ್ಲಿ 'ಜೈವಿಕ ಕೀಟ ನಿಯಂತ್ರಣ'ದ ಬಗ್ಗೆ ಪ್ರಾತ್ಯಕ್ಷಿಕೆ ಮತ್ತು ಉಪನ್ಯಾಸವನ್ನು ಏರ್ಪಡಿಸಲಾಗಿದೆ.

ಕೃಷಿಕರಿಗೆ ಅತ್ಯುಪಯುಕ್ತವಾದ ಈ ಕಾರ್ಯಕ್ರಮವನ್ನು ಬೆಂಗಳೂರಿನ 'ಬಯೋಕಾನ್' ಸಂಸ್ಥೆಯ ಮುಖ್ಯ ವಿಜ್ಞಾನಿ, ವ್ಯವಸ್ಥಾಪಕ ಟಿ.ಎಂ. ಮಂಜುನಾಥ್ ಸ್ಲೈಡ್ ಪ್ರದರ್ಶನದೊಡನೆ ನಡೆಸಲಿದ್ದಾರೆ.

ಈ ತಂತ್ರಜ್ಞಾನದ ರೀತ್ಯಾ ಮಲೆನಾಡ ಬೆಳೆಗಳಿಗೆ ಸಂಬಂಧಪಟ್ಟ ಕೀಟ-ಪಿಡುಗುಗಳ ನಿವಾರಣೆಯ ವಿವರಗಳನ್ನು ಅಡಿಕೆ ಪತ್ರಿಕೆಯ ಫೆಬ್ರವರಿ 1990ರ ಸಂಚಿಕೆಯ ಪ್ರಮುಖ ಲೇಖನದಲ್ಲಿ ಪ್ರಕಟಿಸಿರುವುದನ್ನು ಸ್ಮರಿಸಬಹುದು. ಈ ಕಾರ್ಯಕ್ರಮವನ್ನು ಕೃಷಿಕರು ಸಂಪೂರ್ಣ ಸದುಪಯೋಗಪಡಿಸಿಕೊಳ್ಳಬೇಕೆಂದು ಸಂಘಟಕರು ಕೋರಿದ್ದಾರೆ

### ವನಮಹೋತ್ಸವ

ಕೊಪ್ಪ : ವನಮಹೋತ್ಸವದ ಅಂಗವಾಗಿ ಇಲ್ಲಿನ ಲಯನ್ಸ್ ಕ್ಲಬ್, ಅರಣ್ಯ ಇಲಾಖೆ ಮತ್ತು ಮಂಡಲ ಪಂಚಾಯ್ತಿ ಸಂಯುಕ್ತ ಆಶ್ರಯದಲ್ಲಿ ಜು. 21 ರಂದು ಕಿರಿಯ ಕಾಲೇಜು ಆವರಣದಲ್ಲಿ ಗಿಡಗಳನ್ನು ನೆಡಲಾಯಿತು. ಶಾಸಕ ಶಾಮಣ್ಣ, ಪಿ ಬಿ. ವಿವೇಕ್, ಎಂ. ಡಿ. ಬಾಲಕೃಷ್ಣ, ಪಿ ಜಿ. ಗುರ್ಜರ್, ಲಯನ್ಸ್ ಅಧ್ಯಕ್ಷ ವೆಂಕಟೇಶ್, ಬಿ. ಜಿ ಚಿದಂಬರ್, ಸುಮಿತ್ರಮ್ಮ, ಪ್ರಿನ್ಸಿಪಾಲ್, ಡಿಎಫ್‌ಒ ಮುಂತಾದವರು ಇದರಲ್ಲಿ ಪಾಲ್ಗೊಂಡಿದ್ದರು.

### ಶಾಲಾ ವನ

ಶಾನುವಳ್ಳಿ : ಇಲ್ಲಿಗೆ ಸಮೀಪದ ಕೋಡೂರು ಶಾಲೆಯಲ್ಲಿ ಜು. 24 ರಂದು ಶಾಸಕ ಯು. ಕೆ. ಶಾಮಣ್ಣನವರ ಅಧ್ಯಕ್ಷತೆಯಲ್ಲಿ ನಡೆದ ವನಮಹೋತ್ಸವದಲ್ಲಿ, ಸುಮಾರು 3 ಎಕರೆ ಪ್ರದೇಶದಲ್ಲಿ ಹಣ್ಣಿನ ಗಿಡಗಳು ಹಾಗೂ ನಾಟಾ ಮತ್ತು ಉರುವಲು ಜಾತಿಯ ಸಸಿಗಳನ್ನು ನೆಟ್ಟು, 'ಶಾಲಾ ವನ' ರಚಿಸಲಾಯಿತು. ಮಂಡಲ ಪ್ರಧಾನ ಎಚ್. ಎಂ. ಕೃಷ್ಣಮೂರ್ತಿ, ವಿೂಗಾ ಶ್ರೀನಿವಾಸ್, ಸ| ಶಿಕ್ಷಣಾಧಿಕಾರಿ ಅತಿಥಿಗಳಾಗಿದ್ದರು. ಶಾಲೆಗೆ ಶಿಕ್ಷಕರ ಕೊರತೆ ತುಂಬಲು ಶಾಸಕರನ್ನು ವಿನಂತಿಸಲಾಯಿತು. (ವರದಿ : ವಿೂಗಾ ಜಗದೀಶ್)

ಅನಿವಾರ್ಯ ಕಾರಣಗಳಿಂದ ನಮ್ಮ 22-7-90ರ ಸಂಚಿಕೆ ಪ್ರಕಟವಾಗಲಿಲ್ಲ.

—ಸಂ.

ಧರ್ಮದರ್ಶಿ ಕಮಿಟಿಯ ಕೆಲವರ ಜಾತೀಯತೆ, ಪ್ರತಿಷ್ಠೆಗಳಿಂದಾಗಿ

# ಕಿಗ್ಗ ದೇವಸ್ಥಾನದಲ್ಲೊಂದು ಅರ್ಥವಿಲ್ಲದ ರಾದ್ಧಾಂತ

● ಕಲ್ಕುಳಿ ವಿಠಲ ಹೆಗ್ಡೆ

ಶೃಂಗೇರಿಯಿಂದ 9 ಕಿ. ಮೀ. ದೂರದಲ್ಲಿರುವ ಕಿಗ್ಗದ ಋಷ್ಯಶೃಂಗೇಶ್ವರ ದೇವಸ್ಥಾನವು ಮುಜರಾಯಿ ಇಲಾಖೆಗೆ ಸೇರಿದ್ದರೂ, ಅದರ ಧರ್ಮದರ್ಶಿ ಕಮಿಟಿಯ ಕೆಲವರ ಜಾತೀಯತೆ, ಪ್ರತಿಷ್ಠೆ, ಅದಕ್ಕಾಗಿ ನಡೆಸುವ ಕುತಂತ್ರ, ದೌರ್ಜನ್ಯಗಳಿಂದಾಗಿ ಆಗಾಗ ಸುದ್ದಿ ಮಾಡುತ್ತಿರುತ್ತದೆ.

ಕಳೆದ ಏಪ್ರಿಲ್-ಮೇ ತಿಂಗಳಿಂದ ಶುರುವಾದ ಹಗರಣವೊಂದು ಇತ್ತೀಚೆಗೆ ವಿಕೋಪಕ್ಕೆ ಹೋಗಿ ಕೊನೆಗೂ ಒಂದು ರೀತಿ ರಾಜಿ ಎಂದು ಆಗಿದೆ. ಆದರೆ ಈ ನಡುವೆ, "ಜಾತಿಯವರೇ ಆದ ಒಬ್ಬರನ್ನು ಕಮಿಟಿಯವರು ವಿನಾ ಕಾರಣ ಜೈಲಿಗೆ ಹಾಕಿಸಿದ್ದನ್ನು ಪ್ರತಿಭಟಿಸಿ" ಕಮಿಟಿಯ ಮೂವರು ಸದಸ್ಯರು ರಾಜೀನಾಮೆ ನೀಡಿದ್ದೂ ಆಗಿದೆ.

### ರಾದ್ಧಾಂತಕ್ಕೆ ನಾಂದಿ

ಈಚೆಗೆ ದೇವಸ್ಥಾನದ ಒಂದು ಮಗ್ಗುಲಲ್ಲಿ ಕಮಿಟಿಯವರು "ದೇವಸ್ಥಾನದ ಪರಿಶುದ್ಧತೆ ಕಾಪಾಡಲು" ಎಂಬ ನೆಲೆಯಲ್ಲಿ ತಂತಿ ಬೇಲಿ ಮಾಡಿಸಿದ್ದು ಈ ಬಾರಿಯ ಹಗರಣಗಳಿಗೆ ನಾಂದಿಯಾಯಿತು. ಆ ಜಾಗದಲ್ಲಿ ಹತ್ತಿರದ ಕೆಲವು ಹಳ್ಳಿಗಳಿಗೆ ಹೋಗುವ ಕಾಲು ದಾರಿ, ನೆರೆಯ ಕೆ. ಆರ್. ಶೃಂಗೇಶ್ವರ ರಾವ್ ಅವರ ಮನೆಗೆ ಹೋಗುವ ಕಾಲು ದಾರಿ ಹಾಗೂ ಅವರ ಅನುಭವದಲ್ಲಿದ್ದ ಸುಮಾರು ಮುಕ್ಕಾಲು ಎಕರೆಯಷ್ಟು ಭೂಮಿ ಮತ್ತು ಮಂಡಲ ಪಂಚಾಯ್ತಿಗೆ ಸೇರಿದ ಗ್ರಾಮ ಠಾಣ— ಇವೆಲ್ಲ ಸೇರಿದ್ದವು.

ಈ ಮುಕ್ಕಾಲು ಎಕರೆ ಭೂಮಿಯನ್ನು ದೇವಸ್ಥಾನಕ್ಕೆ ಬಿಟ್ಟು ಕೊಡುವಂತೆ ಕೇಳಲು ಕಮಿಟಿಯವರು ಶೃಂಗೇಶ್ವರ ರಾವ್ ಅವರ ಮನೆಗೆ ಹೋದಾಗ ಅವರು ತಮಗೆ ಅನುಕೂಲವಾದ ಒಂದು ಕಾಲುದಾರಿ ಹಾಗೂ ಒಡ್ಡಿನ ನೀರು ಹೋಗಲು ಮಾರ್ಗ ತೋರಿಸಿ ಎಂದು ಕೇಳಿದ್ದಕ್ಕೆ, ಕಮಿಟಿಯ ಪ್ರತಿಷ್ಠಿತರ ಉಡಾಫೆಯಿಂದ ಮಾತಿಗೆ ಮಾ[illegible] ಬೆಳೆದು, ಜಾಗ ಬಿಟ್ಟು ಕೊಡಲು ಅವ[illegible]ಪ್ಪಲಿಲ್ಲವೆನ್ನಲಾಗಿದೆ. ಆದರೆ ಅವರ [illegible] ಇತರ ಹಳ್ಳಿಗಳವರ ವಿರೋಧ [illegible]ಲಕ್ಷಿಸದೆ ಕಮಿಟಿ ಬೇಲಿ ಹಾಕಿಸಿಯೇ ಬಿಟ್ಟಿತು.

### ತಡೆಯಾಜ್ಞೆ

ಇದನ್ನು ವಿರೋಧಿಸಿ, ರಾವ್ ನ್ಯಾಯಾಲಯದಿಂದ ತಡೆಯಾಜ್ಞೆ ತಂದರು. ಈ ಮಧ್ಯೆ, ಕಾಲುದಾರಿ ಬಿಡಿಸಿಕೊಡುವಂತೆ ಹಳ್ಳಿಗರು ಮಂಡಲ ಪಂಚಾಯ್ತಿಗೆ ಮನವಿ ಮಾಡಿದರು. ಅಲ್ಲದೆ, ಕಳೆದ ವರ್ಷವೇ ಮಂಡಲ ಪಂಚಾಯ್ತಿಯವರು ತಮ್ಮ ಗ್ರಾಮ ಠಾಣವನ್ನು ಅಳೆಸಿ, ಗಡಿ ಗುರುತಿಸಿದ್ದರು. ಇದು ತಹಸೀಲ್ದಾರರಿಗೂ ಗೊತ್ತಿದ್ದರೂ ಸಹ ಅವರು ಆ ಜಾಗವನ್ನು "ದೇವಸ್ಥಾನದ್ದೆಂದೇ" ತಿಳಿದರಂತೆ.

ಶೃಂಗೇಶ್ವರರಾವ್ ತಡೆಯಾಜ್ಞೆ ತಂದುದು ಸ. ನಂ. 26 ರಲ್ಲಿನ ಅವರ ಜಾಗಕ್ಕೆ ಮಾತ್ರ (ಇಡೀ ಬೇಲಿ ವಿವಾದಕ್ಕಲ್ಲ) ಎಂಬ ನಂಬಿಕೆಯೊಡನೆ ಮಂಡಲದವರು ತಮ್ಮ ಠಾಣಾದಲ್ಲಿನ ಬೇಲಿ ತೆಗೆಸಿಕೊಡುವಂತೆ ಸರ್ವಾನುಮತದ ನಿರ್ಣಯ ಮಾಡಿ, ಜಿ. ಪ. ಕಾರ್ಯದರ್ಶಿಯವರ ಮೂಲಕ ಜಿಲ್ಲಾಧಿಕಾರಿಗಳಿಗೆ ಕಳಿಸಲಾಗಿ, ಅದು ಸೂಕ್ತ ಕ್ರಮಕ್ಕಾಗಿ 1-6-90 ರಂದು ತಹಸೀಲ್ದಾರರಿಗೆ ಬಂದಿತ್ತು. ಆದರೆ ಅವರು ಕೋರ್ಟ್ ಆದೇಶವಿದೆಯೆಂದು ಸುಮ್ಮನಿದ್ದರಂತೆ.

### ಬೇಲಿ ತೆರವು

ದಾರಿಯ ಅಗತ್ಯವಿದ್ದವರ ಒತ್ತಡ ಹೆಚ್ಚಿದಾಗ ಮಂಡಲ ಪಂಚಾಯ್ತಿಯವರು ಮಂ. ಪಂ. ಕಾಯ್ದೆ 72 (2) ರನ್ವಯ ಖುದ್ದಾಗಿ ಬೇಲಿ ತೆಗೆಸುವ ನಿರ್ಣಯ ಮಾಡಿ ಅದಕ್ಕೆ ಎಲ್ಲ ಸದಸ್ಯರ ಬೆಂಬಲವೂ ಸಿಕ್ಕಿತು. ಹೀಗಾಗಿ, ಗ್ರಾಮ ಠಾಣಾದ ಬೇಲಿ ತೆಗೆದು ತಂತಿಗಳನ್ನು ಪಂಚಾಯ್ತಿ ಸದಸ್ಯರಾದ ರತ್ನಾಕರ ಮತ್ತು ವಿಜಯ ಹೆಗ್ಡೆ ಇವರುಗಳ ಸುಪರ್ದಿಗೆ ಕೊಡಲಾಯಿತು. ಅವರು ಕೂಡಲೇ ಸಾಗಿಸಲು ಸಾಧ್ಯವಾಗದ್ದಕ್ಕೆ, ಹತ್ತಿರವೇ ಇದ್ದ ಶೃಂಗೇಶ್ವರರಾವ್ ಅವರ ಮನೆಯಲ್ಲಿಟ್ಟರು

### ದೂರು – ಬಂಧನ

4 ದಿನದ ನಂತರ ತಹಸೀಲ್ದಾರರು ಖುದ್ದು ಶೃಂಗೇಶ್ವರರಾವ್ ಹಾಗೂ ಮಂಡಲ ಪ್ರಧಾನ-ಉಪ ಪ್ರಧಾನರ ಮೇಲೆ "ಅತಿಕ್ರಮ ಪ್ರವೇಶ ಮತ್ತು ದೇವಸ್ಥಾನದ ಬೇಲಿ ತಂತಿ ಕಳವಿನ" ಆರೋಪ ಹೊರಿಸಿ ಪೋಲೀಸರಿಗೆ ದೂರು ನೀಡಿದರು.

ಪೋಲೀಸರು ಪ್ರಧಾನ-ಉಪ ಪ್ರಧಾನರನ್ನು ಬಿಟ್ಟು, ನಿರೀಕ್ಷಣಾ ಜಾಮೀನು ಪಡೆಯಲು ನ. ರಾ. ಪುರಕ್ಕೆ ಹೋಗಿದ್ದ ಶೃಂಗೇಶ್ವರರಾವ್ ಅವರನ್ನು ಮಾತ್ರ ಬಂಧಿಸಿ 1 ದಿನ ಜೈಲು ಕಾಣಿಸಿದ್ದು ಧರ್ಮದರ್ಶಿಗಳ ಪ್ರತಿಷ್ಠೆಗೆ ರೆಕ್ಕೆ ಬಂದಂತಾಯಿತು ಶೃಂಗೇಶ್ವರ ರಾವ್ ತಾನೇ ತಂದಿದ್ದ ತಡೆಯಾಜ್ಞೆಯನ್ನು ತಾನೇ ಉಲ್ಲಂಘಿಸಿದ ಆರೋಪಕ್ಕೆ ಬಲಿಯಾದ ವಿಪರ್ಯಾಸ!

### ಹಿನ್ನೆಲೆಯೇನು?

ಧರ್ಮದರ್ಶಿ ಕಮಿಟಿ ಇಷ್ಟೆಲ್ಲ ರಾದ್ಧಾಂತ ಎಬ್ಬಿಸಿ ಈ ಬೇಲಿ ಹಾಕಲು ನೀಡಿದ್ದ ಕಾರಣ: ದೇವಸ್ಥಾನದ ಪಕ್ಕದಲ್ಲೇ ಹೊಲೆ-ಹನ್ನೊಂದು ಜಾತಿಯವರೆಲ್ಲ ಚಪ್ಪಲಿ ಹಾಕಿಕೊಂಡು ಓಡಾಡುತ್ತಾರೆ ತಂಬುಳಗಿಂಬುಳ ತುಪ್ಪುತ್ತಾರೆ. ದೇವಸ್ಥಾನಕ್ಕೆ ಅಶುದ್ಧಿಯಾಗುತ್ತೆ. ಅದನ್ನು ತಪ್ಪಿಸಲು ಬೇಲಿ ಹಾಕುತ್ತಿರುವುದು—ಎಂದು. ಆದರೆ, ದೇವಸ್ಥಾನದ ಒಳ ವಲಯಗಳಲ್ಲಿ ಕೆದಕಿದಾಗ ವ್ಯವಸ್ಥಿತವಾದ ಬೇರೆಯದೇ ಒಂದು ಕುತಂತ್ರದ ವಾಸನೆ ಹೊಡೆಯುತ್ತದೆ

ವರ್ಷಕ್ಕೊಮ್ಮೆ ನಡೆಯುವ ಮಹಾರುದ್ರಹೋಮದಂದು, ದೇವಸ್ಥಾನಕ್ಕೆ ಭಕ್ತರಾಗಿ ನಡೆದುಕೊಳ್ಳುವ ಸುತ್ತಲ ಸೀಮೆಯ ನಾನಾ ಜಾತಿಗಳ ಜನ ಯಥಾ ಶಕ್ತಿ ಕಾಣಿಕೆ-ದೇಣಿಗೆ ನೀಡಿ, ಪ್ರಸಾದ ರೂಪದಲ್ಲಿ ಊಟ ಮಾಡಿ ಹೋಗುವುದು ವಾಡಿಕೆಯಾಗಿದ್ದು, ಇತ್ತೀಚೆಗೆ ಇದರಲ್ಲಿನ ಪಂಕ್ತಿ ಭೇದದ ವಿರುದ್ಧ ಪ್ರತಿಭಟನೆ ಎದ್ದ ಮೇಲೆ, ಒಂದು ವರ್ಷ ಬ್ರಾಹ್ಮಣರು ಊಟ ಬಿಟ್ಟಿದ್ದು, ಮತ್ತೊಂದು ವರ್ಷ ರುದ್ರ ಹೋಮವೇ ನಡೆಯದೆ, ಆದರ ಮರು ವರ್ಷ ಬ್ರಾಹ್ಮಣರು ಮತ್ತು ಇತರೆ ಜಾತಿಯ ಕೆಲವೇ ಜನ ಸೇರಿ ಹರಿಹರಪುರ ಗುರುಗಳ ನೇತೃತ್ವದಲ್ಲಿ ಪಂಕ್ತಿ-ಭೇದ ಸಹಿತವಾಗಿಯೇ ಸಣ್ಣ ಸಂತರ್ಪಣೆ ಮಾಡಿದ್ದು; ಅದರ ಮರು ವರ್ಷ ಸ್ವಲ್ಪ ಸುಧಾರಣೆ ಮಾಡಿ, "ದೇವಸ್ಥಾನದೊಳಗೆ ಯಾರಿಗೂ ಊಟವಿಲ್ಲ"ವೆಂದು ತೀರ್ಮಾನಿಸಿ, ಬ್ರಾಹ್ಮಣರಿಗೆ ಕನ್ವೀನರ್ ಶಿವಶಂಕರರಾವ್ ಅವರ ಮನೆಯಲ್ಲೂ, ಇತರರಿಗೆ ದೇವಸ್ಥಾನದ ಹೊರ ಆವರಣದಲ್ಲಿ ಕಲ್ಲುಕಂಬ-ತಗಡು ಹಾಕಿ ವ್ಯವಸ್ಥೆ ಮಾಡಿ ಅಲ್ಲಿ ಊಟವೆಂದೂ ವ್ಯವಸ್ಥೆಯಾಗಿತ್ತು. ಈ ವ್ಯವಸ್ಥೆ ಈಗೆರಡು ವರ್ಷಗಳಿಂದಲೂ ಸ್ವಲ್ಪ ಸ್ವಲ್ಪ ಪ್ರತಿರೋಧದೊಂದಿಗೆ ನಡೆದು ಬರುತ್ತಿದೆ

(ಈ ಕಲ್ಲುಕಂಬ-ತಗಡಿನ 'ಊಟದ ಜಾಗ'ವನ್ನು ಬೇರೆ ದಿನಗಳಲ್ಲಿ, ಅದರಲ್ಲೂ ಮಳೆಗಾಲದಲ್ಲಿ ನೋಡಿದವರು ಮತ್ತೆ ಅಲ್ಲಿ ಕುಳಿತು ಉಣ್ಣಲಾರರು. ದನ-ಕರುಗಳು ನಿಂತು, ಉಚ್ಚೆ-ಸಗಣಿ-ಕೆಸರು ರಾಡಿ ಎದ್ದಿರುತ್ತದೆ)

ಈಗ ಅದನ್ನೂ ಸ್ಥಳಾಂತರಿಸಿ, ಬೇರೆ ಜಾಗದ ವ್ಯವಸ್ಥೆ ಮಾಡುವುದಕ್ಕಾಗಿಯೇ ಹೀಗೆ ಬೇಲಿ ಹಾಕಿ ಜಾಗ ಆಕ್ರಮಿಸಿಕೊಂಡದ್ದು ಎಂಬುದು ದೇವಸ್ಥಾನದೊಳಗಿನಿಂದ ಕೇಳಿ ಬರುವ ಗುಟ್ಟು.

ಅಂತೂ ಇದೀಗ ಸಂಧಾನ ನಡೆದು ಎಲ್ಲ ದೂರುಗಳನ್ನೂ ವಾಪಸು ಪಡೆಯಲು ಹಾಗೂ, ಕಮಿಟಿಯವರು ದೇವಸ್ಥಾನದ ಪಕ್ಕದಲ್ಲಿ ಹೆಚ್ಚುವರಿ ಜಾಗ ಕೇಳಿ ಅರ್ಜಿ ಸಲ್ಲಿಸುವುದೆಂದೂ ತೀರ್ಮಾನವಾಗಿದೆಯಂತೆ.

# ನಾಲೆಯ ಮಣ್ಣು ಕುಸಿದು ಯುವ ಕಾರ್ಮಿಕನ ದುರ್ಮರಣ: ಅವನ ಜೀವಕ್ಕೆ 20 ಸಾವಿರ ರೂ. ಬೆಲೆ ಕಟ್ಟಿ ಕೈ ತೊಳೆದುಕೊಂಡ ಬೇಜವಾಬ್ದಾರಿ ಜಿಲ್ಲಾ ಪರಿಷತ್ತು!

ನ. ರಾ. ಪುರ: ಕೆಲಸ ಮಾಡಿಸುತ್ತಿದ್ದ ಮೇಸ್ತ್ರಿಯ ಬೇಜವಾಬ್ದಾರಿತನದಿಂದಾಗಿ ಈ ತಾಲ್ಲೂಕಿನ ವರ್ಕಾಟೆ ಗ್ರಾಮದ ಮಾವಿನ ಹಳ್ಳದ ನಾಲೆಯ ಮಣ್ಣು ಕುಸಿದು ಜಗದೀಶ ಎಂಬ 25ರ ಪ್ರಾಯದ ಕಾರ್ಮಿಕ ದುರ್ಮರಣಕ್ಕೀಡಾಗಿದ್ದಾನೆ

ಜು. 18ರಂದು ಧಾರಾಕಾರ ಮಳೆಯಲ್ಲಿ ಈ ದುರ್ಘಟನೆ ನಡೆದಿದ್ದು, ಆಂಧ್ರದ ಕಡೆಯವನೆನ್ನಲಾದ ಸದರಿ ಮೇಸ್ತ್ರಿ ಅಂದು ರಾತ್ರಿಯೇ ಸಂಸಾರ ಸಮೇತ ಊರು ಬಿಟ್ಟಿದ್ದಾನೆಂದು 'ಮುಂಜಾವು'ಗೆ ತಿಳಿದು ಬಂದಿದೆ

### ಕಾಮಗಾರಿಯ ವಿವರ

ನ.ರಾ. ಪುರ-ಕೂಸುಗಲ್ಲು ರಸ್ತೆಯಿಂದ ನಾಲ್ಕು ಕಿ.ಮೀ. ಒಳಗೆ ಮಾವಿನಹಳ್ಳಕ್ಕೆ 12 ಮೀ. ಉದ್ದ, 1 ಮೀ. ಎತ್ತರದ ಅಡ್ಡಗಟ್ಟೆ ಕಟ್ಟಿ, ಈ ಒಡ್ಡಿನ ಬಲಭಾಗದಲ್ಲಿ 4 ಮೀ. (ಸುಮಾರು 13 ಅಡಿ) ಆಳವಿರುವ 70 ಮೀ. ಉದ್ದದ ಕಾಲುವೆಯನ್ನು 4 ವರ್ಷದ ಹಿಂದೆ ಗ್ರಾಮಸ್ಥರಿಂದಲೇ ತೋಡಿಸಲಾಗಿತ್ತು. ಈ ನಾಲೆ ಮೇಲ್ಗಡೆ 3ರಿಂದ 3.5 ಮೀಟರ್ ಅಗಲವಾಗಿಯೂ, ತಳದಲ್ಲಿ ಕೇವಲ ಅರ್ಧ ಮೀಟರ್ ಅಗಲವಾಗಿಯೂ ಇದೆ.

ಜಿ ಪ. ಇಂಜಿನಿಯರಿಂಗ್ ವಿಭಾಗದಿಂದ ಕಳೆದ ವರ್ಷ ಈ ಕಾಲುವೆಯಲ್ಲಿ 300 ಮಿ. ಮೀ. (ಒಂದು ಅಡಿ) ವ್ಯಾಸದ ಕೊಳವೆಗಳನ್ನು ಹಾಕುವ ಕೆಲಸ ಕೈಗೊಳ್ಳಲಾಗಿತ್ತು. ಈ ಕೆಲಸ ನಡೆಯುವಾಗ ಚಿಕ್ಕದೊಂದು ಬಂಡೆ ಅಡ್ಡಿ ಬಂದಿದ್ದರಿಂದ ಅದಕ್ಕೆ 3 ಡೈನಾಮೈಟ್‌ಗಳನ್ನು ಇಡಲಾಯಿತು. ಆದರೆ ಅದರಲ್ಲಿ 2 ಮಾತ್ರ ಸಿಡಿದು ಇನ್ನೊಂದು ಸಿಡಿಯದಿದ್ದಾಗ, ಈ ಧೂರ್ತ ಮೇಸ್ತ್ರಿ ಜಗದೀಶನಿಗೆ ಕಾಲುವೆಯೊಳಗೆ ಇಳಿದು ಯಾಕೆ ಸಿಡಿಯಲಿಲ್ಲವೆಂದು ನೋಡಿ ಬರಲು ತಿಳಿಸಿದ್ದಾಗಿ ತಿಳಿದು ಬಂದಿದೆ.

ಜಗದೀಶ್ ಇಳಿಯಲು ಹೆದರಿಕೊಂಡಾಗ, ಮೇಸ್ತ್ರಿಯು "ಏನೂ ಆಗುವುದಿಲ್ಲ. ಇಳಿದು ನೋಡಿ ಬಾ" ಎಂದು ಒತ್ತಾಯಿಸಿ ಇಳಿಸಿದನೆನ್ನಲಾಗಿದೆ. ಆದರೆ 2 ಆಸ್ಫೋಟಗಳಿಂದ ಆಗಲೇ ಜರುಗಿದ್ದ ಕಾಲುವೆಯ ಬದಿಗಳ ಮೆದುಮಣ್ಣು ಬೃಹತ್ ಪ್ರಮಾಣದಲ್ಲಿ ಕುಸಿದು ಬಿತ್ತು.

ಸುಮಾರು 10 ಲೋಡಿಗಿಂತಲೂ ಹೆಚ್ಚು ಮಣ್ಣು ಈ ಬಡಪಾಯಿ ಕಾರ್ಮಿಕನ ಮೇಲೆ ಕುಸಿದು ಬಿದ್ದಾಗ ಅವನಿಗೆ ತಪ್ಪಿಸಿಕೊಳ್ಳಲು ಆಸ್ಪದವೇ ಇಲ್ಲದೆ ಜೀವಂತ ಸಮಾಧಿಯಾದನು. ಜಗದೀಶನ ಬಂಧುಗಳು ಹೇಳುವ ಪ್ರಕಾರ, ಅವನ ತೊಡೆಯ ಭಾಗ ತೀವ್ರವಾಗಿ ಜಖಂಗೊಂಡಿದ್ದು, ಬಹುಶಃ ಅದೇ ವೇಳೆಗೆ 3ನೇ ಡೈನಾಮೈಟ್ ಕೂಡ ಸ್ಫೋಟಿಸಿರುವುದಾಗಿ ಅವರುಗಳು ಶಂಕಿಸುತ್ತಾರೆ. ಅಂದರೆ, ಮಣ್ಣು ಕುಸಿಯದೆ ಇದ್ದಿದ್ದರೂ, ಡೈನಾಮೈಟ್‌ನಿಂದಲಾದರೂ ಜಗದೀಶನಿಗೆ ಪ್ರಾಣಾಪಾಯವಿತ್ತೆನ್ನಬಹುದು.

ಜಗದೀಶನ ವೃದ್ಧ ತಂದೆ-ತಾಯಿಗಳು ಕಡು ಬಡವರಾಗಿದ್ದು, ಹಿರಿಯ ಮಗನಾದ ಜಗದೀಶನೇ ಕುಟುಂಬದ ಮೂಲಾಧಾರವಾಗಿದ್ದನು. ಅವನಿಗೆ ಮದುವೆ ಕೂಡ ನಿಶ್ಚಯವಾಗಿತ್ತೆಂದು ತಿಳಿದು ಬಂದಿದೆ.

(3ನೇ ಪುಟಕ್ಕೆ)

## ಓದುಗರ ಪತ್ರಗಳು

### ಬೆಳೆಗಾರರ ಸಮಸ್ಯೆಗಳಿಗೆ ಪರಿಹಾರ ಅವರಲ್ಲೇ ಇದೆ

ಪ್ರಿಯರೆ,

ತಾ|| 29-7-90 ರ 'ಮುಂಜಾವು' ಓದುಗರ ವಿಭಾಗದಲ್ಲಿ ಕೊಪ್ಪದ ಅಡಿಕೆ ಬೆಳೆಗಾರರ ಸಂಘವು ಅಡಿಕೆ ಪತ್ರಿಕೆಯ ಸಂಪಾದಕರಾದ 'ಶ್ರೀ' ಪಡ್ರೆಯವರನ್ನು ಕರೆಯಿಸಿ ಅವರಿಂದ "ಕೃಷಿ ಪತ್ರಿಕೋದ್ಯಮ ತರಬೇತಿ ಶಿಬಿರ"ವನ್ನು ಕೊಪ್ಪದಲ್ಲಿ ನಡೆಸುವ ವ್ಯವಸ್ಥೆ ಮಾಡಿದೆ ಎಂದಿದ್ದಾರೆ. ಅವರು ತಿಳಿಸಿದಂತೆ ಕೊಪ್ಪದಲ್ಲಿರುವ ಅಡಿಕೆ ಬೆಳೆಗಾರರ ಸಂಘದ ಹೆಸರು "ಚಿಕ್ಕಮಗಳೂರು ಜಿಲ್ಲಾ ಅಡಿಕೆ ಬೆಳೆಗಾರರ ಸಂಘ" ಎಂದಾದರೂ, ಅದರಲ್ಲಿ ಇರುವವರೆಲ್ಲರೂ ಹೆಚ್ಚಾಗಿ ಕೊಪ್ಪ ತಾಲ್ಲೂಕಿನವರೇ. ಈ ಸಂಘದ ಚಟುವಟಿಕೆಯೂ ಅಂಥ ಹೇಳಿಕೊಳ್ಳುವಷ್ಟೇನೂ ಇಲ್ಲ. **"ಸುಮಾರು 40 ವರ್ಷದಿಂದ ಅಸ್ತಿತ್ವದಲ್ಲಿರುವುದೇ ಈ ಸಂಘದ ಒಂದು ದೊಡ್ಡ ಸಾಧನೆ"** ಎಂದರೂ ತಪ್ಪಾಗಲಾರದು

ಈ ಸಂಘವು ಈ ಶಿಬಿರಕ್ಕೆ ಸಹಕಾರ ಕೊಡುತ್ತಿದೆಯೇ ಹೊರತು ಶಿಬಿರ ನಡೆಸುವ ಏರ್ಪಾಡನ್ನು ಹುಟ್ಟು ಹಾಕಿದವರು ಕೊಪ್ಪ ಸಿಂಡಿಕೇಟ್ ಬ್ಯಾಂಕ್‌ನ ಕೃಷಿ ವಿಚಾರ ವಿನಿಮಯ ಕೇಂದ್ರದ ಸದಸ್ಯರಾದ ಹಲವಾರು ಮಧ್ಯಮ ವರ್ಗದ ಬೆಳೆಗಾರರೇ.

(4ನೇ ಪುಟಕ್ಕೆ)

## ನಾಡ ಕಛೇರಿಗಳು "ಇರಬೇಕೆ - ಬೇಡವೆ ?" — ಎಂಬ ಚರ್ಚೆಗಿಂತ ಕಛೇರಿಯೊಂದು "ಹೇಗಿರಬೇಕು?" ಎಂಬ ಜಿಜ್ಞಾಸೆ ಯುಕ್ತ

ಪ್ರಿಯರೆ,

ಜನತಂತ್ರವನ್ನು ಹಳ್ಳಿಯ ಬಾಗಿಲಿಗೆ ಒಯ್ಯುವ ಉದ್ದೇಶದಿಂದ ಹಿಂದಿನ ಸರ್ಕಾರ ಪ್ರಾಯೋಗಿಕವಾಗಿ ಕೆಲವು ಆಯ್ದ ಹೋಬಳಿಗಳಲ್ಲಿ ಪ್ರಾರಂಭಿಸಿದ ನಾಡ ಕಛೇರಿಗಳು ಇರಬೇಕೆ? ಬೇಡವೆ? ಎಂಬ ಜಿಜ್ಞಾಸೆ ಈಚೆಗೆ ವ್ಯಾಪಕವಾಗಿ ಪ್ರಕಟವಾಗುತ್ತಿದೆ. ಆದರೆ ಬಹುತೇಕ ಸರ್ಕಾರಿ ಕಛೇರಿಗಳ ವೈಖರಿಯಿಂದ ಬೇಸತ್ತಿರುವ ಸಾಮಾನ್ಯ ಜನರಿಗೆ, ತಮ್ಮನ್ನು ನಿರಂತರವಾಗಿ ಸತಾಯಿಸಿ ಶೋಷಿಸುವ ಈ ಕಛೇರಿಗಳೆಲ್ಲ ಯಾತಕಾಗಿ, ಯಾರಿಗಾಗಿ ಇವೆ? ಎಂದು ಅನ್ನಿಸುತ್ತಿರುವುದು ಸಹಜ ಆದರೆ ಯಾವುದೇ ಪ್ರಭುತ್ವದಲ್ಲಿ ಕೂಡ ಆಡಳಿತದ ಅನುಕೂಲಕ್ಕಾಗಿ ಈ ಕಛೇರಿಗಳು ಇರುವುದಂತೂ ಅನಿವಾರ್ಯ ಅಂದ ಮೇಲೆ "ಇವು ಇರಬೇಕೆ? ಬೇಡವೆ?" ಎಂಬ ಜಿಜ್ಞಾಸೆಗಿಂತಲೂ, "ಇವು ಹೇಗಿರಬೇಕು?" ಎಂಬುದೇ ಮುಖ್ಯವೆನಿಸುತ್ತದೆ.

ತಮ್ಮ ಜರೂರು ಅಗತ್ಯಗಳಿಗಾಗಿ ದಿನ ಬೆಳಗಾದರೆ ರೈತರು-ಶ್ರಮಿಕ ವರ್ಗ ಕಛೇರಿಗಳಿಗೆ ಹೋಗಲೇಬೇಕಾದ ಅನಿವಾರ್ಯ ಸ್ಥಿತಿಯ ಈ ದಿನಗಳಲ್ಲಿ ಅವರ ಬೇಡಿಕೆಯನ್ನು ಕೂಡಲೇ ಗಮನಿಸಿ ಪರಿಹಾರ ದೊರಕಿಸಿಕೊಡಬೇಕಾದುದು ಆಯಾ ಕಛೇರಿಯ ಮುಖ್ಯ ಅಧಿಕಾರಿಯ ಹೊಣೆ. ಈ ಕೆಲಸದಲ್ಲಿ ಕಛೇರಿಯ ಸಿಬ್ಬಂದಿ ವರ್ಗ ಆ ಮುಖ್ಯಾಧಿಕಾರಿಗೆ ಸಹಾಯಕರಾಗಿ ಇರಬೇಕೇ ಹೊರತು ಅವರೇ ಪ್ರಭುಗಳಂತೆ ವರ್ತಿಸುತ್ತ ದಳ್ಳಾಳಿಗಳ ಸಹಕಾರದಿಂದ ಬಡ ಜನತೆಯನ್ನು ಚಾಕಚಕ್ಯತೆಯಿಂದ ನಿರಂತರವಾಗಿ ಸತಾಯಿಸಿ ಶೋಷಿಸುವ ಕೆಟ್ಟ ಪದ್ಧತಿ ಕೂಡಲೇ ತೊಲಗಬೇಕು. ಆಯಾ ಕಛೇರಿಯ ಮುಖ್ಯಾಧಿಕಾರಿಗಳು ದೃಢ ಮನಸ್ಸು ಮಾಡ ಬಲ್ಲರಾದರೆ ಇದು ಅಸಾಧ್ಯವೇನಲ್ಲ.

ಉದಾಹರಣೆಗೆ ಕೆಲವು ತಿಂಗಳುಗಳ ಹಿಂದೆ ಕೊಪ್ಪ ತಾಲ್ಲೂಕಿಗೆ ಬಂದ ತಹಸೀಲ್ದಾರ್ ಜಿ.ಎಸ್. ನಾಯಕ್ ಸ್ವಯಂ ಸ್ಫೂರ್ತಿಯಿಂದ ಜಾರಿಗೆ ತಂದಿರುವ ವಿನೂತನ ವ್ಯವಸ್ಥೆ-ಸಾಮಾನ್ಯ ಜನಕ್ಕಂತೂ ತುಂಬಾ ಅನುಕೂಲ ಉಂಟುಮಾಡಿದೆ. ಕಛೇರಿಗೆ ಬಂದ ಜನರ ಮನವಿಯನ್ನು ಸ್ವತಃ ಗಮನಿಸಿ ಕೂಡಲೇ ಕೆಲಸ ಪೂರೈಸಿ, ಕಳಿಸುವ ಈ ತಹಸೀಲ್ದಾರರ ಕ್ರಮವನ್ನು ಎಲ್ಲ ಕಛೇರಿಗೂ ಅಳವಡಿಸುವುದಾದರೆ, ಯಾವುದೇ ಕಛೇರಿ ಇರಬೇಕೆ? ಬೇಡವೆ? ಎಂಬ ಜಿಜ್ಞಾಸೆಗೆ ಅವಕಾಶವೇ ಇರುವುದಿಲ್ಲ.

**—ಹರಿಹರಪುರ ಬಿ. ಸುಬ್ರಹ್ಮಣ್ಯಂ,**
ಬೆಂಗಳೂರು.

## ಇದು ರಸ್ತೆಯೆನ್ನಬಹುದೆ ?

ಪ್ರಿಯರೆ,

ಪ್ರೇಕ್ಷಣೀಯ ಸ್ಥಳವಾಗಿರುವ ಶೃಂಗೇರಿಯ 'ಮುಖ್ಯ' ರಸ್ತೆಯಾದ ಭಾರತೀ ಬೀದಿಯು ಕೊಳಕು ಮತ್ತು ಕಂದರಗಳಿಂದ ತುಂಬಿರುವುದು ವಿಪರ್ಯಾಸ.

ಮೊನ್ನೆ ಇನ್ನೂ ರಸ್ತೆಯ ದುರಸ್ತಿ ನಡೆದಿದೆ. ಆದರೆ, ಈಗಾಗಲೇ ಅದರ ಸ್ಥಿತಿ ಸ್ವಲ್ಪ ಸ್ವಚ್ಛತೆಯ ಕಾಳಜಿಯಿದ್ದವರು ಅದರಲ್ಲಿ ತಿರುಗದಂತಾಗಿದೆ.

ಕಾರಣವೆಂದರೆ, ಈ ರಸ್ತೆಯು ಅಲ್ಲಲ್ಲಿ, ಅದರಲ್ಲೂ ಮುಖ್ಯವಾಗಿ ಜಾನುವಾರು ಆಸ್ಪತ್ರೆ, ಕೆನರಾ ಬ್ಯಾಂಕ್ ಮತ್ತು ಪೋಲೀಸ್ ಠಾಣೆಯ ಹತ್ತಿರವಂತೂ ಕೆಲವೆಡೆ ಅರ್ಧ ಅಡಿಯವರೆವಿಗೂ ಆಳವಾದ ಗುಳಿ ಬಿದ್ದಿದ್ದು, ವೇಗದ ಮಿತಿಯಿಲ್ಲದೇ ಓಡಿಸುವ ವಾಹನಗಳಿಂದ ಪಚಕ್ಕನೆ ಅಲ್ಲಿ ತಿರುಗುವವರಿಗೆಲ್ಲ ಬಣ್ಣದ ನೀರಿನ ಪ್ರೋಕ್ಷಣೆ ಶತಸ್ಸಿದ್ಧ. ಜೊತೆಗೆ ಗೋಮಾತೆಯ 'ಪರಮ ಭಕ್ತ'ರಾದ ಕೆಲವು ಮಹನೀಯರು ತಮ್ಮ ಜಾನುವಾರುಗಳಿಗೆ ರಸ್ತೆಯನ್ನೇ ಹುಲ್ಲುಗಾವಲಾಗಿ ಮಾಡಿಕೊಂಡಿರುವುದರಿಂದ ಅವು ದಾರಿಹೋಕರಲ್ಲಿ ಭಯ ಹುಟ್ಟಿಸುವುದು ಮತ್ತು ಸಂಚಾರಕ್ಕೆ ತೀವ್ರ ಅಡ್ಡಿಯುಂಟು ಮಾಡುವುದು ಮಾತ್ರವಲ್ಲದೆ, ಅವುಗಳ ಸಗಣಿಯೂ ಈ ಕೆಸರು ನೀರಿನೊಂದಿಗೆ ಬೆರೆತು ಜಿಗುಪ್ಸೆ ಹುಟ್ಟಿಸುತ್ತದೆ.

ಈಗ ಅಧಿಕಾರ ವಹಿಸಿಕೊಂಡಿರುವ ಹೊಸ ಮಂಡಲದ ಪದಾಧಿಕಾರಿಗಳು, 'ಕೊಟ್ಟವನು ಕೋಡಂಗಿ ತಗೊಂಡವನು ಈರಭದ್ರ' ಎಂಬಂತಾಗದೇ, ಈ ರಸ್ತೆಯನ್ನು ತಾತ್ಕಾಲಿಕವಾಗಿಯಾದರೂ ಸರಿಪಡಿಸುವತ್ತ ತುರ್ತು ಕ್ರಮ ಕೈಗೊಂಡಾರೆ? ಜೊತೆಗೆ ಮುಂದಿನ ಮಳೆಗಾಲಕ್ಕಾದರೂ ರಸ್ತೆಯಲ್ಲಿ ನಿರಾಳವಾಗಿ ತಿರುಗಬಹುದೆಂದು ಆಶಿಸಬಹುದೆ ?

**—ವೈ.ಗ. ಜಗದೀಶ್,**
ವೈಕುಂಠಪುರ.

## "ಆಟೋ ಚಾಲಕರು ಸುಲಿಗೆ ಮಾಡುತ್ತಿಲ್ಲ; ಎಲ್ಲ ಕಡೆಯಿಂದಲೂ ಸುಲಿಗೆಗೀಡಾಗಿದ್ದಾರೆ"

ಪ್ರಿಯರೆ,

ಕೊಪ್ಪದ ಆಟೋ ರಿಕ್ಷಾಗಳವರು ಸಾರ್ವಜನಿಕರಿಂದ, ಯದ್ವಾ ತದ್ವಾ ಬಾಡಿಗೆ ಕೇಳುತ್ತಿದ್ದಾರೆಂಬ ಆರೋಪ ಈಚೆಗೆ ಹಲವು ಪತ್ರಿಕೆಗಳಲ್ಲಿ ಪ್ರಕಟವಾಗಿದೆ. ಇದು ಹುರುಳಿಲ್ಲದ, ದುರುದ್ದೇಶದ ಆರೋಪ ಎಂಬುದಕ್ಕೆ ಉದಾಹರಣೆಯಾಗಿ ಕೆಲವು ಅಂಶಗಳನ್ನು ಸಾರ್ವಜನಿಕರ ಗಮನಕ್ಕೆ ತರಬಯಸುತ್ತೇನೆ.

1. ರಿಕ್ಷಾ ಚಾಲಕರು ಪ್ರಯಾಣಿಕರಿಂದ ಮನ ಬಂದಂತೆ ಹಣ ವಸೂಲು ಮಾಡಲು ಕೊಪ್ಪವೇನು ಪ್ರವಾಸಿ ಕೇಂದ್ರವಾಗಲಿ ಯಾತ್ರಾ ಸ್ಥಳವಾಗಲಿ ಅಲ್ಲ. ಏನಿದ್ದರು ಸ್ಥಳೀಯರು ಮತ್ತು ಸುತ್ತಮುತ್ತಲ ಹಳ್ಳಿಗಳವರೇ ಓಡಾಡಬೇಕು. 'ಯಾರಾದರೂ ಸಂಬಂಧಿಗಳು ಬರುವುದಿದ್ದರೂ ಅವರಿಗೆ ರಿಕ್ಷಾ ಬಾಡಿಗೆ ಇಂತಿಷ್ಟೇ ಆಗುತ್ತೆಂದು ಅವರ ಇಲ್ಲಿನ ಬಂಧುಗಳು ಮೊದಲೇ ತಿಳಿಸಿರುತ್ತಾರೆ.

2 ಸ್ಥಳೀಯರು ರಿಕ್ಷಾ ಹತ್ತುವಾಗ 100-150 ಕಿಲೋಗಳಷ್ಟು ಲಗೇಜು ಇದ್ದರೂ ಹೆಚ್ಚಿಗೆ ಬಾಡಿಗೆಯೇನೂ ಕೊಡಲೊಪ್ಪುವುದಿಲ್ಲ. "ನಾವು ಕೊಡುವುದು ಇಷ್ಟೇ" ಎಂದು ವಾದಿಸುತ್ತಾರೆ.

3. ಕೆಲವೊಮ್ಮೆ ಒಬ್ಬರು ಅಥವಾ ಇಬ್ಬರು ರಿಕ್ಷಾ ಹತ್ತಿ, ಅವರು ಹೋಗಬೇಕಾದ ಸ್ಥಳಕ್ಕೆ ಹೋಗುವುದರೊಳಗೆ ದಾರಿಯಲ್ಲಿ ಅಲ್ಲಲ್ಲಿ ನಿಲ್ಲಿಸಿ ಇನ್ನೂ 2-3 ಜನರನ್ನು ಹತ್ತಿಸಿಕೊಳ್ಳುತ್ತಾರೆ. ಕೆಲವೊಮ್ಮೆ ಒಂದೆರಡು ಕಡೆ 5-10 ನಿಮಿಷ ಕಾಯಿಸುವುದೂ ಇದೆ. ಒಮ್ಮೆ ಒಬ್ಬ ಅನುಕೂಲಸ್ಥ ಮನುಷ್ಯ ಬಸ್‌ಸ್ಟ್ಯಾಂಡಿನಲ್ಲಿ ಹತ್ತಿ, ಬಾಳಗಡಿ ಸರ್ಕಲ್, ಮೇಲಿನಪೇಟೆ ಓರಿಯೆಂಟಲ್ ಇನ್‌ಶೂರೆನ್ಸ್ ಕಛೇರಿ ಹಾಗೂ

(4ನೇ ಪುಟಕ್ಕೆ)

## ಕಾಲುವೆಯ ಮಣ್ಣು ಕುಸಿದು ಕಾರ್ಮಿಕನ ದುರ್ಮರಣ

(2ನೇ ಪುಟದಿಂದ)

ಈ ದುರ್ಘಟನೆ ನಡೆದ ಕೂಡಲೇ ಅದಕ್ಕೆ ಕಾರಣನಾದ ಮೇಸ್ತ್ರಿ ತಲೆ ತಪ್ಪಿಸಿಕೊಂಡಿದ್ದರೆ, ಜಿ.ಪ. ಕಾಮಗಾರಿ ಅಧಿಕಾರಿಗಳು ಅವರಿವರಿಂದ ಒಂದು 20 ಸಾವಿರ ರೂ.ಗಳನ್ನು ಸಂಗ್ರಹಿಸಿ ಜಗದೀಶನ ಕುಟುಂಬದವರಿಗೆ ಕೊಟ್ಟು, ಇಲಾಖೆಯ ವಿರುದ್ಧ ನ್ಯಾಯಾಲಯ ಅಥವಾ ಇನ್ನಾವುದೇ ರೀತಿ ಕಾನೂನು ಕ್ರಮ ಕೈ ಗೊಳ್ಳುವುದಿಲ್ಲವೆಂದು ಅವರಿಂದ ಮುಚ್ಚಳಿಕೆ ಬರೆಸಿಕೊಂಡು, ಕೈ ತೊಳೆದುಕೊಂಡಿದ್ದಾರೆಂದು ವರದಿಯಾಗಿದೆ. ಕಂಟ್ರ್ಯಾಕ್ಟರೂ 5 ಸಾವಿರ ರೂ. ಕೊಟ್ಟಿರುವುದಾಗಿ ಬಂಧುಗಳು ಹೇಳಿದ್ದಾರೆ.

ಅಲ್ಲದೆ, ಈ ಬಗ್ಗೆ ಜಿ. ಪ. ಎಕ್ಸಿಕ್ಯುಟಿವ್ ಇಂಜಿನಿಯರ್ ಅವರು ಜಿ ಪ ಗೆ ಸಲ್ಲಿಸಿರುವ ವರದಿ ಹಲವಾರು ಅಸಂಗತಗಳಿಂದ ಕೂಡಿದ್ದು, ಸಂಬಂಧಪಟ್ಟ ಇಂಜಿನಿಯರ್, ಇಲಾಖೆಯ ಪರವಾಗಿ ಕೆಲಸ ನಿರ್ವಹಿಸಿದ ಕಂಟ್ರ್ಯಾಕ್ಟರ್, ಮೇಸ್ತ್ರಿ ಮುಂತಾದ ಎಲ್ಲರ ಬೇಜವಾಬ್ದಾರಿತನಗಳನ್ನು ಮುಚ್ಚಿ ಹಾಕುವ ಸ್ಪಷ್ಟ ಪ್ರಯತ್ನವಾಗಿದೆ.

"ಮೃತ ಕಾರ್ಮಿಕ ಇಲಾಖೆಯ ಅಧಿಕೃತ ಕೂಲಿಗಾರರ ಹಾಜರಿ ಪಟ್ಟಿಯಲ್ಲಿ ಸೇರಿದವನಲ್ಲವಾದ್ದರಿಂದ, ಅಲ್ಲದೆ ಆವನ ಬಂಧುಗಳಿಂದ 'ಮುಚ್ಚಳಿಕೆ' ಬರೆಸಿಕೊಂಡಿರುವುದರಿಂದ, ಜಿ.ಪ. ಇಂಜಿನಿಯರಿಂಗ್ ವಿಭಾಗಕ್ಕೆ ಯಾವುದೇ ರೀತಿ ಆರ್ಥಿಕ ನಷ್ಟ ಬರುವುದಿಲ್ಲ" ಎಂಬಂಥ ನಿರ್ಲಜ್ಜ, ನಿಷ್ಕಾಳಜಿಯ ಮಾತುಗಳು ಹಾಗೂ ಈ ದುರಂತಕ್ಕೆ ಇಲಾಖೆ ಮತ್ತು ಅಧಿಕಾರಿಗಳು ಯಾವ ರೀತಿಯಲ್ಲೂ ಹೊಣೆಯಲ್ಲವೆಂದು ಜಿಲ್ಲಾ ಪರಿಷತ್ತನ್ನು ನಂಬಿಸಲು ತಿಣುಕಿರುವುದು- ಇವೇ ಆ ವರದಿಯ ತಿರುಳಾಗಿವೆ ಎಂದು ವರದಿಯಾಗಿದೆ.

ಹೀಗೆ ಅಡ್ನಾಡಿ ಇಂಜನಿಯರ್‌ಗಳು, ಮೇಸ್ತ್ರಿಗಳು, ಕಂಟ್ರ್ಯಾಕ್ಟರ್‌ಗಳು, ಗಣಿ ಗುತ್ತಿಗೆದಾರರು-ಇವರೇ ಮುಂತಾದವರೆಲ್ಲ ಬಡ ಕಾರ್ಮಿಕರನ್ನು "ಏನೂ ಆಗೊಲ್ಲ, ಹೆದರಬೇಡ...." ಎಂದು ಸುರಕ್ಷಿತವಲ್ಲದ ಕೆಲಸಗಳಿಗೆ ಹಚ್ಚುವುದು ಅಥವಾ ನಿಯಮಾನುಸಾರ, ಸುರಕ್ಷಾ ಕ್ರಮಗಳನ್ನು ಕೈಗೊಳ್ಳದಿರುವುದು, ಆ ಮೂಲಕ ಒಂದೊಂದು ಕುಟುಂಬದ ಅನ್ನದಾತರ ಪ್ರಾಣವನ್ನೇ ಹೀರುವುದು ಎಲ್ಲೆಡೆ ಆಗೀಗ ನಡೆಯುತ್ತಲೇ ಇದೆ.

**ಜಿಲ್ಲಾ ಪರಿಷತ್ತಿನಲ್ಲಿ ಯಾರಿಗಾದರೂ ಜವಾಬ್ದಾರಿ, ಮಾನವೀಯತೆಗಳಿದ್ದರೆ, ಜಗದೀಶನ ಸಾವಿನ ಸಮಗ್ರ ಪ್ರಾಮಾಣಿಕ ತನಿಖೆಯಾಗಿ, ಎಲ್ಲ ತಪ್ಪಿತಸ್ಥರಿಗೂ ತಕ್ಕ ಶಿಕ್ಷೆಯಾಗಬೇಕು. ಆಗ ಮಾತ್ರ ಇಂಥ ದುರಂತಗಳು ಮತ್ತೆ ಮತ್ತೆ ಆಗುವುದಕ್ಕೆ ಕಡಿವಾಣ ಹಾಕಬಹುದು. ಆದಾಗದಿದ್ದರೆ, ಯಾರಾದರೂ ಸಾರ್ವಜನಿಕರು ಇಂಥ ತನಿಖೆ, ಶಿಕ್ಷೆ ಆಗುವಂತೆ ಆದೇಶ ಕೋರಿ ನ್ಯಾಯಾಲಯದಲ್ಲಿ ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಯನ್ನು ಹೂಡಬಹುದು.**

# ಆಟೋ ಚಾಲಕರು ಶೋಷಕರಲ್ಲ, ಸುಲಿಗೆಗೆ ಬಲಿಯಾಗುವವರು

(3ನೇ ಪುಟದಿಂದ)

ಮೇಲಿನಪೇಟೆಯ ಇನ್ನೊಂದು ಕಡೆ—ಹೀಗೆ 3 ಕಡೆ ನಿಲ್ಲಿಸಿ 4 ಜನರನ್ನು ಹತ್ತಿಸಿಕೊಂಡರು. ಒಟ್ಟು 5 ಜನರನ್ನೂ ಶೃಂಗೇರಿ ರಸ್ತೆಯ ಸಾಮಿಲ್‌ವರೆಗೂ ಬಿಟ್ಟು, 1 ರೂ. ಹೆಚ್ಚಿಗೆ ಕೇಳಿದರೆ ಕೊಡಲೊಪ್ಪದೆ, "ನಡೀ ಸ್ಟೇಶನ್‌ಗೆ" ಎಂದು ದರ್ಪ ತೋರಿಸಿದರು. "ನಡೆಯಿರಿ ಹೋಗೋಣ" ಎಂದರೆ ಸ್ಟೇಶನ್‌ಗೂ ಬರದೆ, ದುಡ್ಡೂ ಕೊಡದೆ ಸತಾಯಿಸಿದರು. ಇಂಥ ದುಃಖಕರ ಸನ್ನಿವೇಶಗಳು ನಮಗೆ ಯಾವಾಗಲೂ ಎದುರಾಗುತ್ತಿರುತ್ತವೆ.

4. ರಾತ್ರಿ 9-30 ಗಂಟೆಯ ನಂತರ ಮಾಮೂಲಿ ಬಾಡಿಗೆಯ ಒಂದೂವರೆ ಪಟ್ಟು ತೆಗೆದುಕೊಳ್ಳಬಹುದೆಂದು ಸರ್ಕಾರದ ಆದೇಶವೇ ಇದ್ದರೂ, ನಾವು ಹಗಲು ತೆಗೆದುಕೊಳ್ಳುವಷ್ಟೇ ತೆಗೆದುಕೊಳ್ಳುತ್ತಿದ್ದೇವೆ. ಯಾರೂ ಹೆಚ್ಚಿಗೆ ಕೊಡುತ್ತಿಲ್ಲ.

5. ಕೊಪ್ಪ ಬಸ್ ನಿಲ್ದಾಣದಿಂದ 5 ಕಿ.ಮಿ. ವರೆಗಿನ ಹಳ್ಳಿಗಳಿಗೆ ಬಾಡಿಗೆ ಮಾತಾಡಿ ಹತ್ತಿಕೊಂಡು, ದಾರಿಯುದ್ದಕ್ಕೂ ತಮ್ಮ ಗುರುತಿನವರನ್ನು ಹತ್ತಿಸಿಕೊಳ್ಳುತ್ತಾರೆ. ಅಥವಾ ಅಲ್ಲಿಗೆ ತಲುಪಿದ ಮೇಲೆ "ನಾವು ಕೊಡುವುದು ಇಷ್ಟೇ" ಎಂದು ಸತಾಯಿಸುತ್ತಾರೆ. ಆಗ ನಾವು ನಿಸ್ಸಹಾಯಕರಾಗುತ್ತೇವೆ. ಒತ್ತಾಯಿಸಿ ಕೇಳಲು ನಾವು ಒಬ್ಬಂಟಿಗರು, ಅವರು ನಾಲ್ಕೈದು ಜನ ಇರುತ್ತಾರೆ. ನಮಗೆ ಯಾವ ರಕ್ಷಣೆಯೂ ಇರುವುದಿಲ್ಲ.

6 ಸಂತೆಯ ದಿನ ಕೆಲವರು 10-15 ಕಿಲೊ ಸಾಮಾನಿದ್ದರೂ ಅದನ್ನು ಸಂತೆಯೊಳಗಿನ ಅಂಗಡಿಯಲ್ಲೇ ಬಿಟ್ಟು ಬಂದು, ಸ್ಟಾಂಡಿನಿಂದ ರಿಕ್ಷಾವನ್ನು ಅಲ್ಲಿಗೆ ಒಯ್ಯುತ್ತಾರೆ. ಸಂತೆಯೊಳಗೆ ಹೋಗುವಾಗ ಮತ್ತು ಬರುವಾಗ ಮೊದಲ ಗೇರ್‌ನಲ್ಲೇ ಓಡಿಸಬೇಕಾಗುವುದರಿಂದ ಅಲ್ಲೇ ಒಂದೂವರೆಯಿಂದ ಎರಡು ರೂ.ಗಳಷ್ಟು ಪೆಟ್ರೋಲ್ ಖರ್ಚಾಗಿರುತ್ತದೆ. ಇದಕ್ಕೆಲ್ಲ ಯಾರೂ ಹೆಚ್ಚಿಗೆ ಕೊಡುವುದಿಲ್ಲ.

ಹೀಗೆ ನಮ್ಮ ಸಮಸ್ಯೆ, ತೊಂದರೆಗಳು ಯಾರ ಕಣ್ಣಿಗೂ ಬೀಳುವುದಿಲ್ಲ. ಬಿದ್ದರೂ ಸಹಾನುಭೂತಿ ತೋರುವವರು ಎಷ್ಟು ಜನ? ಇಷ್ಟೆಲ್ಲ ಕಷ್ಟ-ಸಂಕಟಗಳನ್ನು ಅನುಭವಿಸಿಯೂ ನಾವುಗಳು ನಿಷ್ಠೆಯಿಂದ ದುಡಿದು ಹೊಟ್ಟೆ ಪಾಡು ನೀಗಿಕೊಳ್ಳಲು ಪರದಾಡುತ್ತಿದ್ದೇವೆ. ಹೊರತು ಯಾರದೋ ತಲೆ ಸವರಿ ಹೊಟ್ಟೆ ಹೊರೆಯುತ್ತಿಲ್ಲ.

ಇದರ ಮೇಲೆ, ಪೆಟ್ರೋಲ್, ಬಿಡಿಭಾಗಗಳು, ರಿಪೇರಿ—ಎಲ್ಲದಕ್ಕೂ ಯದ್ವಾತದ್ವಾ ಬೆಲೆಯಾಗಿರುವ ಈ ದಿನಗಳಲ್ಲಿ, ನಮ್ಮ ಮೇಲೆ ಕ್ರಮ ಕೈಗೊಳ್ಳಲು ಅವಕಾಶವಿರುವ ಇಲಾಖೆಗಳವರಿಗೂ—ಅವರಿಗೆ 'ಕೇಸ್' ಬೇಕಾದಾಗಲೆಲ್ಲ—ನಾವು ಆಗಾಗ ಬಲಿ ಪಶುಗಳಾಗುತ್ತಲೇ ಇರಬೇಕಾಗಿದೆ. ಅಲ್ಲದೆ ಡ್ರೈವಿಂಗ್ ಲೈಸೆನ್ಸ್, ವಾರ್ಷಿಕ ತಪಾಸಣೆ, 5 ವರ್ಷಕ್ಕೊಮ್ಮೆ ಪರ್ಮಿಟ್ ನವೀಕರಣ—ಇವೆಲ್ಲಕ್ಕೂ ಬ್ರೋಕರ್‌ಗಳನ್ನು ಹಿಡಿದು, ಒಂದಕ್ಕೆ ನಾಲ್ಕು ಪಟ್ಟು ಹಣ ಚೆಲ್ಲಿಯೇ ಆಗಬೇಕು. ಇನ್‌ಶೂರೆನ್ಸ್ ದರ 300 ರೂ.ಗಳಿದ್ದುದನ್ನು ಒಂದೇ ಬಾರಿಗೆ ದುಪ್ಪಟ್ಟು ಮಾಡಿದೆ ನಮ್ಮ ಘನ ಸರ್ಕಾರ!

ಹೀಗೆ ಎಲ್ಲ ದಿಕ್ಕುಗಳಿಂದಲೂ ತುಳಿತಕ್ಕೆ, ಸುಲಿಗೆಗೆ ಒಳಗಾಗಿಯೂ, ಮರ್ಯಾದಸ್ಥ ಜೀವನ ನಡೆಸಲು ಹೆಣಗುತ್ತಿರುವ ನಮಗೆ, ಈ ರೀತಿ ದೂರು ಬರೆದ ಶಿವರಾಮಪ್ಪ ಅವರಂಥ (ಬದ್ಧವೋ, ಬೇನಾಮಿಯೋ ಆದ) ವ್ಯಕ್ತಿಗಳಿಂದ ಇಂಥ 'ಉಡುಗೊರೆ'ಗಳೂ ಆಗಾಗ ಸಿಗುತ್ತಿರುತ್ತವೆ!

ನಿಜವಾಗಿಯೂ ರಿಕ್ಷಾದವರಿಂದ ತೊಂದರೆಗೊಳಗಾದವರು "ಇಂಥವರಿಂದ" ಎಂದು ದೂರು ಕೊಟ್ಟರೆ ಯಾರೂ ಆಕ್ಷೇಪಿಸುವುದಿಲ್ಲ. ಅದರ ಬದಲು ಹೀಗೆ ಸಾರಾಸಗಟಾಗಿ ಸತ್ಯದೂರವಾದ ಆರೋಪಗಳನ್ನು ಮಾಡಿದರೆ ಎಲ್ಲರಿಗೂ ನೋವಾಗುತ್ತದೆ.

—ನೊಂದ ರಿಕ್ಷಾ ಚಾಲಕರು, ಕೊಪ್ಪ.

(13 ಜನರ ಸಹಿಗಳಿವೆ)

# ಬೆಳೆಗಾರರ ಸಮಸ್ಯೆಗಳಿಗೆ ಪರಿಹಾರ ಅವರಲ್ಲೇ ಇದೆ

(3ನೇ ಪುಟದಿಂದ)

ಅವರೇ ಇದಕ್ಕೆಲ್ಲಾ ಪ್ರೇರಕ ಶಕ್ತಿಯಾಗಿ ಎಲೆಯ ಮರೆಯ ಕಾಯಿಯಂತೆ ದುಡಿಯುತ್ತಿರುವವರು.

ಕೊಪ್ಪ, ಶೃಂಗೇರಿ, ತೀರ್ಥಹಳ್ಳಿ ತಾಲ್ಲೂಕುಗಳಲ್ಲಿ ಅನೇಕ ಮಂದಿ ಉತ್ಸಾಹಿ, ಪ್ರಗತಿಪರ ರೈತರಿದ್ದು ಎಲ್ಲರೂ ಒಟ್ಟಾಗಿ ಪ್ರತಿ ತಿಂಗಳಿಗೊಂದರಂತೆ ಕೃಷಿಗೆ ಸಂಬಂಧಿಸಿದ, ಬೆಳೆಗಾರರಿಗೆಲ್ಲಾ ಉಪಯುಕ್ತವಾಗುವಂತಹ ಅನೇಕ ಕಾರ್ಯಕ್ರಮಗಳನ್ನು ಮಾಡಲು ಅವಕಾಶವಿದೆ. ಆದರೆ, ಕೆಲವು ಹಳೇ ತಲೆಮಾರಿನ ಸಂಪ್ರದಾಯ ಬದ್ಧ ರೈತರು ಕೆಲವು ಸಂಘ-ಸಂಸ್ಥೆಗಳ ಪದಾಧಿಕಾರಿಗಳಾಗಿದ್ದು, ಕುರ್ಚಿಯನ್ನು ಬಿಡದೆ, ಕೆಲಸವನ್ನೂ ಮಾಡದೆ, ಪ್ರತಿಯೊಂದು ಕೆಲಸಕ್ಕೆ ಅಡ್ಡ ಕಾಲು ಹಾಕುತ್ತಾರೆ. ಆದರೆ ಇತ್ತೀಚೆಗೆ ಕೆಲವು ಹೊಸ 'ರಕ್ತ'ಗಳು ಮುಂದೆ ಬಂದಿರುವುದು ಆಶಾದಾಯಕ.

ಉದಾಹರಣೆಗೆ—ನೈಸರ್ಗಿಕ ಬೇಸಾಯದ ತಪಸ್ವಿ ಶ್ರೀ ಪ್ರದೀಪ್ ತಪಸ್‌ರವರನ್ನು ಕೊಪ್ಪಕ್ಕೆ ಕರೆಸಿ ಉಪಯುಕ್ತ ಮಾರ್ಗದರ್ಶನವನ್ನು ಪಡೆಯಲು ಅನುವು ಮಾಡಿಕೊಟ್ಟ ಕೊಪ್ಪದ "ಕೃಷಿ ವಿಚಾರ ವಿನಿಮಯ ಕೇಂದ್ರ"ದ ಕಾರ್ಯವು ಅನೇಕ ಜನ ಬೆಳೆಗಾರರಿಗೆ ಒಂದು ಹೊಸ ಲೋಕವನ್ನೇ ತೆರೆದಿದ್ದು, ಇದರಿಂದ ಪ್ರಭಾವಿತರಾಗಿ ಅನೇಕ ಮಂದಿ ನೈಸರ್ಗಿಕ ಬೇಸಾಯವನ್ನು ಅಳವಡಿಸಿಕೊಳ್ಳುತ್ತಿದ್ದಾರೆ. (ಪ್ರತಿ ತಿಂಗಳೂ ತಪಸ್‌ರವರನ್ನು ಕರೆಸುವುದೆಂದು ಪತ್ರಿಕೆಗಳಲ್ಲಿ ಬಂದಿತ್ತು, ಮುಂದೆ ಆ ಬಗ್ಗೆ ಏನಾಯಿತೋ ಗೊತ್ತಿಲ್ಲ.)

ಕೆಲವು ವರ್ಷಗಳ ಹಿಂದೆ ನಮ್ಮ ತಾಲ್ಲೂಕಿನವರೇ ಆದ ಸೋಮನಾಥ್ ಎಂಬವರು, ತಮ್ಮ ಕೈಯಿಂದಲೇ ಕೆಲವು ಸಾವಿರ ರೂ.ಗಳನ್ನು ಖರ್ಚು ಮಾಡಿ 'ಅಡಿಕೆ ಸುಲಿಯುವ ಯಂತ್ರ'ವನ್ನು ಶೇ. 90 ಭಾಗ ಸಿದ್ಧಪಡಿಸಿದ್ದರು. ಆದರೆ ಹಲವಾರು ಶ್ರೀಮಂತ ಬೆಳೆಗಾರರಿದ್ದರೂ ಯಾರೂ ಅವರಿಗೆ ಪ್ರೋತ್ಸಾಹ ನೀಡದಿದ್ದುದರಿಂದ, ಅವರು ನಿರಾಶರಾಗಿ, ತಮ್ಮ ಪ್ರಯತ್ನ ಬಿಟ್ಟು ಬೆಂಗಳೂರಿಗೆ ಕೆಲಸಕ್ಕೆ ಹೋದರೆಂದು ಸುದ್ದಿ.

ಬೆಳೆಗಾರರಾದ ನಮಗೆ ಸಮಸ್ಯೆಗಳಿವೆ; ನಿಜ. ಅಂತೆಯೇ ಅವುಗಳಿಗೆ ಪರಿಹಾರವೂ ನಮ್ಮಲ್ಲೇ ಇದೆ. ಆದರೆ ಅದನ್ನು ವ್ಯವಸ್ಥಿತವಾಗಿ ರೂಪಿಸುವವರಿಲ್ಲದೆ ಎಲ್ಲವೂ ಹಾಳಾಗಿ ಹೋಗುತ್ತಿದೆ. ಒಂದು ವೇಳೆ ಯಾರಾದರೂ ಮುಂದೆ ಬಂದು ಕೆಲಸ ಮಾಡಿದರೂ ಉಳಿದವರು ಪ್ರೋತ್ಸಾಹಿಸದಿರುವುದು ಅಥವಾ ಕೆಲಸ ಮಾಡುವವರೊಬ್ಬರು—ಹೆಸರು ಮತ್ತೊಬ್ಬರಿಗೆ ಆಗುವುದು ನಡೆಯುತ್ತಲೇ ಇದೆ.

ಆದ್ದರಿಂದ ಈಗಲಾದರೂ ಈ ತಾ||ಗಳ ಎಲ್ಲ ಬೆಳೆಗಾರರು ಒಗ್ಗಟ್ಟಾಗಿ, ತಮ್ಮ ಸಮಸ್ಯೆಗಳನ್ನು ಸಾಮೂಹಿಕ ಯತ್ನದಿಂದ ಬಗೆಹರಿಸಿಕೊಳ್ಳಲು ಒಂದು ಭೂಮಿಕೆ ಸಿದ್ಧಪಡಿಸುವ ಉತ್ಸಾಹಿಗಳಿಗೆ ಸಂಪೂರ್ಣ ಬೆಂಬಲ ಕೊಡಲೇ ಬೇಕು.

—ಕೆ. ಎಸ್. ವೆಂಕಟೇಶ್,
ಭಾರತೀ ನಗರ, ಶೃಂಗೇರಿ.

(ಸೋಮನಾಥ್‌ರವರ ಪ್ರಯೋಗ ನಿಂತಿಲ್ಲ; ಶಿವಮೊಗ್ಗದ ಸಿಂಡಿಕೇಟ್ ಮಂಡಳಿಯವರ ಹಣಕಾಸಿನ ನೆರವಿನಿಂದ, ಪೂರ್ಣತೆಯ ಹಂತಕ್ಕೆ ಬಂದಿದೆಯಂತೆ. ತಪಸ್‌ರವರ 'ಪ್ರತಿ ತಿಂಗಳ ಕಾರ್ಯಕ್ರಮ'ದ ಬಗ್ಗೆ ತೀರ್ಥಹಳ್ಳಿಯ ಉತ್ಸಾಹಿಗಳು ತಿಳಿಸಬೇಕು. —ಸಂ)

## ಅಡಿಕೆ ಧಾರಣೆ

| | |
|---|---|
| ಶಿವಮೊಗ್ಗ | 3-8-1990 |
| ಸರಕು | 4409-4764 |
| ಬೆಟ್ಟೆ | 3509-4069 |
| ಗೊರಬಲು | 2389-2800 |
| ಸಾಗರ | 3-8-1990 |
| ಇಡಿ | 3690-3829 |
| ಆಪಿ | 4137-4399 |
| ಚಾಲಿ | 3589-3739 |
| ಸಿಪ್ಪೆ ಗೋಟು | 1881-2001 |

# ಅಲ್ಲಲ್ಲಿ ಕೃಷಿ ತರಬೇತಿ ಶಿಬಿರಗಳು

ಜಿಲ್ಲೆಯ ಕೃಷಿ ಇಲಾಖೆ ವಿಶೇಷ ಅಕ್ಕಿ ಉತ್ಪಾದನೆ ಯೋಜನೆಯನ್ವಯ ವಿವಿಧೆಡೆಗಳಲ್ಲಿ ರೈತರಿಗೆ ತರಬೇತಿ ಶಿಬಿರಗಳನ್ನು ನಡೆಸಿತು.

### ಶೃಂಗೇರಿ :

ಮಂಡಲ ಪ್ರಧಾನ ಎಚ್. ಆರ್. ಕೃಷ್ಣಮೂರ್ತಿ ಅಧ್ಯಕ್ಷತೆಯಲ್ಲಿ ಕುಮಾರ ಸ್ವಾಮಿಯಿಂದ ಉದ್ಘಾಟನೆ. ಪ್ರಧಾನ ಕೃಷಿ ಅಧಿಕಾರಿ ಸುಬ್ಬಪ್ಪ ಗೌಡ ಮುಖ್ಯ ಅತಿಥಿ. ಮೂಡಿಗೆರೆ ಕೃಷಿ ಸಂಶೋಧನಾ ಕೇಂದ್ರದ ಡಾ|| ನಾಗರಾಜ್ ಮತ್ತು ಪನ್ನೋಬಳಿ ಸ್ವಾಮಿ ಅವರಿಂದ ಮಾಹಿತಿ ಮತ್ತು ಸ್ಲೈಡ್ ಪ್ರದರ್ಶನ. ಸ.ಕೃ.ನಿ. ಚಂದ್ರಶೇಖರಯ್ಯ ಸ್ವಾಗತಿಸಿ ಬಿ. ಎನ್. ರಾಜಶೇಖರ್ ವಂದಿಸಿದರು.

### ಕಲ್ಲುಗುಡ್ಡೆ

ಬಿ. ಎನ್. ಭಾಸ್ಕರ್ ಅಧ್ಯಕ್ಷತೆಯಲ್ಲಿ ಬಿ. ಕೆ. ವೆಂಕಪ್ಪಯ್ಯನವರಿಂದ ಉದ್ಘಾಟನೆ. ಸ.ಕೃ.ನಿ. ಶ್ರೀನಿವಾಸಯ್ಯ, ಸಿಂಡಿಕೇಟ್ ಬ್ಯಾಂಕ್ ಮ್ಯಾನೇಜರ್ ರಮೇಶರಾವ್, ಮಂಡಲ ಸದಸ್ಯ ಜಿ. ಕೆ. ಶಿವಶಂಕರ್ ಅತಿಥಿಗಳು. ಕೃಷಿ ತಜ್ಞರಾದ ಉತ್ತಪ್ಪ, ಡಾ|| ನಾಗರಾಜ್, ಸ್ವಾಮಿ ಮತ್ತು ಮಂಜಪ್ಪ ಅಧುನಿಕ ಅಡಿಕೆ, ಕಾಳುಮೆಣಸು ಕೃಷಿ ಬಗ್ಗೆ ವಿವರಿಸಿದರು. ಬಿ.ಪಿ. ಸದಾಶಿವರಾವ್ ಅವರ ಕೃಷಿ ಕ್ಷೇತ್ರದಲ್ಲಿ ಭತ್ತದ ಕೃಷಿ ಪ್ರಾಯೋಗಿಕ ತರಬೇತಿ ನಡೆಯಿತು.

ಬಿ. ಎನ್. ವೆಂಕಟರಮಣ ಸ್ವಾಗತಿಸಿ, ವಿ. ಎಸ್. ಶಿವಮೂರ್ತಿ ವಂದಿಸಿದರು. (ವರದಿ: ಜೆ. ಕೆ. ಶಿವಶಂಕರ್)

### ಲೋಕನಾಥಪುರ

ಹಾಸನದ ಜಂಟಿ ಕೃಷಿ ನಿರ್ದೇಶಕ ಎನ್. ಮಹದೇವಯ್ಯನವರ ಉಪಸ್ಥಿತಿಯಲ್ಲಿ ಕೆ. ಮಂಜಪ್ಪ, ಪನ್ನೋಬಳಿ ಸ್ವಾಮಿ ರೈತರಿಗೆ ಮಾಹಿತಿ ನೀಡಿದರು.

### ಹಾಲ್ಮುತ್ತೂರು

ಕೆ. ಕೃಷ್ಣಪ್ಪ ಅವರ ಅಧ್ಯಕ್ಷತೆಯಲ್ಲಿ ಜಯರಾಮ ಜೋಯ್ಸ್ ಉದ್ಘಾಟಿಸಿದರು. ಶ್ರೀನಿವಾಸ್, ಸುರೇಶ ನಾಯ್ಕ, ಮಲ್ಲೇಶಪ್ಪ, ನಾರಾಯಣ ಭಟ್ಟ, ವೆಂಕಟೇಶಯ್ಯ ಮುಖ್ಯ ಅತಿಥಿಗಳಾಗಿದ್ದರು. ಡಾ|| ನಾಗರಾಜ್, ಸ್ವಾಮಿ, ಅನಂತಮೂರ್ತಿ ಮತ್ತು ಡಾ|| ಮಂಜಪ್ಪ ರೈತರಿಗೆ ಮಾರ್ಗದರ್ಶನ ಮಾಡಿದರು.

ಎಚ್. ವಿ. ನಾಗರಾಜ್ ಸ್ವಾಗತಿಸಿ, ಕರಿಯಪ್ಪ ವಂದಿಸಿದರು.





ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್. ಅಚ್ಚು: ದೀಪವಾಟಿಗೆ ಅಚ್ಚುಕೂಟ, ಕೊಪ್ಪ